# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ನಸೀರ್ ಅಹ್ಮದ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 333

ಉತ್ತರಿಸಬೇಕಾದ ದಿನಾಂಕ : 14.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2019–20 ರಿಂದ ಇಲ್ಲಿಯವರೆಗೆ ರೈತರ ಸಾಲ ಮನ್ನಾ (ಸಹಕಾರ ಬ್ಯಾಂಕ್) ಮಾಡುವ ಕುರಿತು ಸರ್ಕಾರ ಕೈಗೊಂಡ ಕ್ರಮವೇನು ಮತ್ತು ಇಲ್ಲಿಯವರೆಗೆ ಎಷ್ಟು ರೈತರಿಗೆ ಸಾಲ ಮನ್ನಾ ಮಾಡಲಾಗಿದೆ; | 2019–20 ರಿಂದ ಇಲ್ಲಿಯವರೆಗೆ ಸರ್ಕಾರದಿಂದ ಸಹಕಾರ ಸಂಘಗಳಲ್ಲಿನ ರೈತರ ಸಾಲ ಮನ್ನಾ ಮಾಡಲು ಯಾವುದೇ ಯೋಜನೆಯನ್ನು ಘೋಷಿಸಿರುವುದಿಲ್ಲ.<br><br>ಆದರೆ, 2018–19 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯ ಅನುಷ್ಠಾನಕ್ಕಾಗಿ ಸರ್ಕಾರ 2020–21ನೇ ಸಾಲಿನ ಆಯವ್ಯಯದಲ್ಲಿ ರೂ. 5,174.92 ಕೋಟಿ ಅನುದಾನ ಕಲ್ಪಿಸಿ ಪೂರ್ಣ ಮೊತ್ತವನ್ನು ಬಿಡುಗಡೆ ಮಾಡಲಾಗಿದೆ. 2020–21 ನೇ ಸಾಲಿನ ಆಯವ್ಯಯದಲ್ಲಿ ರೂ. 260.41 ಕೋಟಿಗಳ ಆಯವ್ಯಯ ಅವಕಾಶ ಕಲ್ಪಿಸಿ ಇದರೊಂದಿಗೆ ಅಪೆಕ್ಸ್ ಬ್ಯಾಂಕಿನಲ್ಲಿ ಗಳಿಸಿದ ಬಡ್ಡಿ ಆದಾಯ ರೂ.23.78 ಕೋಟಿ, ಸಹಕಾರ ಸಂಘಗಳು ವಾಪಸ್ ನೀಡಿದ ಮೊತ್ತ ರೂ.10.95 ಕೋಟಿ ಒಟ್ಟು ರೂ.295.14 ಕೋಟಿಗಳ ಪೂರ್ಣ ಮೊತ್ತವನ್ನು ಬಿಡುಗಡೆ ಮಾಡಲಾಗಿದೆ.<br><br>2018–19 ನೇ ಸಾಲಿನ ರೂ.1.00 ಲಕ್ಷಗಳ ಸಾಲ ಮನ್ನಾ ಯೋಜನೆಯಡಿಯಲ್ಲಿ 2019–20ರಲ್ಲಿ 10,87,672 ರೈತರಿಗೆ ಮತ್ತು 2020–21 ರಲ್ಲಿ 57,229 ರೈತರಿಗೆ ಸಾಲ ಮನ್ನಾ ಮಾಡಿ ಅನುದಾನ ಬಿಡುಗಡೆ ಮಾಡಲಾಗಿದೆ. |
| ಆ) | ರೈತರಿಗೆ ಕೆಲವೊಂದು ಬ್ಯಾಂಕ್‌ಗಳಲ್ಲಿ ಮೋಸ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ರೂ.1.00 ಲಕ್ಷಗಳವರೆಗಿನ ಸಾಲ ಮನ್ನಾ ಮೊತ್ತವನ್ನು ಅಪೆಕ್ಸ್ ಬ್ಯಾಂಕಿನ ಮೂಲಕ NEFT ಮೂಲಕ ರೈತರ ಉಳಿತಾಯ ಖಾತೆಗೆ ಜಮಾ ನೀಡಲಾಗುತ್ತಿದೆ. ಆದರೂ ಸಹ ಅನರ್ಹ ಮೊತ್ತ ಕ್ಲೇಮು ಮಾಡಿ ಹಣದುರುಪಯೋಗ ಆಗಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

**ಸಂಖ್ಯೆ: ಸಿಒ 245 ಸಿಎಲ್‌ಎಸ್ 2021**

ಎಸ್.ಟಿ. ಸೋಮಶೇಖರ್

(ಎಸ್.ಟಿ ಸೋಮಶೇಖರ್)

ಸಹಕಾರ ಸಚಿವರು

(5)

ವಿಧಾನಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:333 ಕ್ಕೆ ಅನುಬಂಧ

1. ಲಕ್ಷ ರೂ. ಸಾಲಮನ್ನಾ ಯೋಜನೆಯ ಹೆಸರಿನಲ್ಲಿ ದುರುಪಯೋಗ ಪಡಿಸಿ ದಾಖಲಾದ ಪ್ರಕರಣಗಳ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಸಂಘದ ಹೆಸರು | ಪ್ರಕರಣದ ಸಂಖ್ಯೆ | ಮೊತ್ತ (ಲಕ್ಷಗಳಲ್ಲಿ) | ಆಪಾದಿತರ ಮೇಲೆ ಕೈಗೊಂಡ ಕ್ರಮ |
|---|---|---|---|---|---|
| 1 | ಬಾಗಲಕೋಟ | ಕುಳಗೇರಿ ಕ್ರಾಸ್ ಪ್ರಾ.ಕೃ.ಪ.ಸ. ಸಂಘ | ಒಂದು ಪ್ರಕರಣ, (70 ರೈತರು) | 39.05 | ಸಂಘದ ಕಾರ್ಯದರ್ಶಿಯನ್ನು ಸೇವೆಯಿಂದ ವಜಾ ಮಾಡಿ ಕ್ರಿಮಿನಲ್ ಪ್ರಕರಣ ದಾಖಲೆ ಮಾಡಲಾಗಿದೆ. ಅಪರಾಧ ಸಂಖ್ಯೆ 0025/2019, ದಿ: 21-11-2019. ಹಾಗೂ ಡಿ.ಸಿ.ಸಿ. ಬ್ಯಾಂಕಿನ ಸಿಬ್ಬಂದಿಯನ್ನು ಸೇವೆಯಿಂದ ಅಮಾನತು ಮಾಡಲಾಗಿದೆ.<br>ದುರುಪಯೋಗದ ಮೊತ್ತವನ್ನು ಸಂಘದಿಂದ ವಾಪಸ್ ಪಡೆಯಲಾಗಿದೆ. |
| 2 | ಬಾಗಲಕೋಟ | ನೀರಲಕೇರಿ ಪ್ರಾ.ಕೃ.ಪ.ಸ. ಸಂಘ | ಒಂದು ಪ್ರಕರಣ, (35 ರೈತರು) | 17.16 | ಸಂಘದ ಕಾರ್ಯದರ್ಶಿಯನ್ನು ಸೇವೆಯಿಂದ ವಜಾ ಮಾಡಿ ಕ್ರಿಮಿನಲ್ ಪ್ರಕರಣ ದಾಖಲೆ ಮಾಡಲಾಗಿದೆ. ಅಪರಾಧ ಸಂಖ್ಯೆ 0025/2019, ದಿ: 21-11-2019. ಹಾಗೂ ಡಿ.ಸಿ.ಸಿ ಬ್ಯಾಂಕಿನ ಸಿಬ್ಬಂದಿಯನ್ನು ಸೇವೆಯಿಂದ ಅಮಾನತು ಮಾಡಲಾಗಿದೆ.<br>ದುರುಪಯೋಗದ ಮೊತ್ತವನ್ನು ಸಂಘದಿಂದ ವಾಪಸ್ ಪಡೆಯಲಾಗಿದೆ.. |

| | | | | | |
|---|---|---|---|---|---|
| 3 | ಉತ್ತರ ಕನ್ನಡ | ವ್ಯವಸಾಯ ಸೇವಾ ಸಹಕಾರಿ ಸಂಘ ನಿ., ಬರಗದ್ದೆ, ತಾ॥ ಕುಮಟಾ | ಒಂದು ಪ್ರಕರಣ, (135 ರೈತರು) | 85.43 | ಕಲಂ 64 ರಡಿ ವಿಚಾರಣೆ ಜರುಗಿಸಲಾಗಿದೆ. ಕಾರ್ಯದರ್ಶಿಯನ್ನು ಅಮಾನತ್ ಮಾಡಲಾಗಿದೆ. ಕುಮಟಾ ಪೋಲಿಸ್‌ಠಾಣೆಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸಲಾಗಿದೆ. ಎಫ್‌ಐನಂ. 0056/2020, ದಿ:24/03/2020. ಪ್ರಸ್ತುತ ಕಲಂ 65 ಬಿ ರಡಿ ಪರಿವೀಕ್ಷಣೆ ಆದೇಶಿಸಲಾಗಿದ್ದು, ವಿಚಾರಣೆಯಲ್ಲಿರುತ್ತದೆ. |
| 4 | ಉತ್ತರ ಕನ್ನಡ | ವ್ಯವಸಾಯ ಸೇವಾ ಸಹಕಾರಿ ಸಂಘ ನಿ., ಜಲವಳ್ಳಿ, ತಾ॥ ಹೊನ್ನಾವರ | ಒಂದು ಪ್ರಕರಣ, (40 ರೈತರು) | 17.96 | ಕಲಂ 64 ರಡಿ ವಿಚಾರಣೆ ಜರುಗಿಸಲಾಗಿದೆ. 2 ಸಿಬ್ಬಂದಿಗಳನ್ನು ಅಮಾನತ್ ಮಾಡಲಾಗಿದೆ. ಪ್ರಕರಣ ಬೆಳಕಿಗೆ ಬರುವುದಕ್ಕಿಂತ ಪೂರ್ವದಲ್ಲಿ ಕಾರ್ಯದರ್ಶಿಯವರು ನಿವೃತ್ತಿ ಹೊಂದಿರುತ್ತಾರೆ. ಹೊನ್ನಾವರ ಪೋಲಿಸ್‌ಠಾಣೆಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸಲಾಗಿದೆ. ಎಫ್‌ಐ ನಂ. 0337/2019, 24/12/2019 ದುರುಪಯೋಗದ ಮೊತ್ತವನ್ನು ಸಂಘದಿಂದ ವಾಪಸ್ ಪಡೆಯಲಾಗಿದೆ. |
| 5 | ಉತ್ತರ ಕನ್ನಡ | ಸತ್ಯಪುರುಷ ಸೇವಾ ಸಹಕಾರಿ ಸಂಘ ನಿ., ಕೆ.ಕೆ.ಹಳ್ಳಿ, ತಾ: ಹಳಿಯಾಳ | ಒಂದು ಪ್ರಕರಣ, (65 ರೈತರು) | 56.72 | ಕಲಂ 64ರ ವಿಚಾರಣಾ ವರದಿಗೆ ಕಲಂ 68ರಡಿಯಲ್ಲಿ ಆದೇಶವನ್ನು ಹೊರಡಿಸಲಾಗಿದೆ. ಸಂಘದಿಂದ ಅನುಪಾಲನಾ ವರದಿ ಪಡೆದು ಅನುಪಾಲನಾ ವರದಿ ನೀಡಿದ್ದು, ಹೆಚ್ಚುವರಿ ಅನುಪಾಲನೆ ನೀಡಲು ತಿಳಿಸಲಾಗಿದೆ. ಅನುಪಾಲನೆ ವರದಿ ಆಧರಿಸಿ ಆಪಾದಿತರ ಮೇಲೆ ಶೀಘ್ರವಾಗಿ ಕ್ರಮ ಕೈಕೊಳ್ಳಲಾಗುವುದು. ದುರುಪಯೋಗದ ಮೊತ್ತವನ್ನು ಸಂಘದಿಂದ ವಾಪಸ್ ಪಡೆಯಲಾಗಿದೆ. |

| | | | | | |
|---|---|---|---|---|---|
| 6 | ಹಾಸನ | ಮತಿಘಟ್ಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ತಾಲ್ಲೂಕು | ಪತ್ರಿಕಾ ವರದಿ ಆಧರಿಸಿ ದೂರು ದಾಖಲಾಗಿರುತ್ತದೆ. | – | ಹಾಸನ ಜಿಲ್ಲೆಯಲ್ಲಿ ಸಾಲಮನ್ನಾ ಯೋಜನೆಯಡಿ 4 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ ಆರೋಪಗಳು ಸ್ವೀಕೃತವಾದ್ದರಿಂದ, ವಿಚಾರಣಾ ಪೂರ್ವದಲ್ಲಿ ಜಿಲ್ಲೆಯ 4 ಸಹಕಾರ ಸಂಘಗಳ ಮುಖ್ಯಕಾರ್ಯನಿರ್ವಹಣಾಧಿಕಾರಿಗಳನ್ನು ಅಮಾನತ್ತು ಮಾಡಲಾಗಿರುತ್ತದೆ ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಸನ ಉಪ ವಿಭಾಗ, ಹಾಸನ ಇವರು ದಿನಾಂಕ: 28.11.2019 ರಂದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 65 ರಡಿ ಪರಿವೀಕ್ಷಣೆಗೆ ಆದೇಶಿಸಿರುತ್ತಾರೆ. ಅದರಂತೆ ಪರಿವೀಕ್ಷಣೆ ಪೂರ್ಣಗೊಂಡು ವರದಿಯನ್ನು ಪಡೆಯಲಾಗಿದ್ದು, ವರದಿಯಂತೆ ಆರೋಪಗಳು ಸಾಭೀತಾಗಿರುವುದಿಲ್ಲ. |
| 7 | ಹಾಸನ | ಗೌಡಗೆರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಚನ್ನರಾಯಪಟ್ಟಣ ತಾಲ್ಲೂಕು | ಪತ್ರಿಕಾ ವರದಿ ಆಧರಿಸಿ ದೂರು ದಾಖಲಾಗಿರುತ್ತದೆ. | – | |
| 8 | ಹಾಸನ | ಹಳೆಕೊಪ್ಪಲು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಾಸನ ತಾಲ್ಲೂಕು | ಪತ್ರಿಕಾ ವರದಿ ಆಧರಿಸಿ ದೂರು ದಾಖಲಾಗಿರುತ್ತದೆ. | – | |
| 9 | ಹಾಸನ | ಹಿರೇಕಡಲೂರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಾಸನ ತಾಲ್ಲೂಕು | ಪತ್ರಿಕಾ ವರದಿ ಆಧರಿಸಿ ದೂರು ದಾಖಲಾಗಿರುತ್ತದೆ. | – | |
| 10 | ಕೋಲಾರ | ಚಿಂತಾಮಣಿ ಶಾಖೆಯ ಶ್ರೀ ಜಿ.ಚಂದ್ರಶೇಖರ್ | ಸಹಕಾರ ಸಂಘಗಳ ನಿಬಂಧಕರ ಕಚೇರಿಯಲ್ಲಿ ದಿ.19-7-2021 ರಂದು ದೂರು ದಾಖಲಾಗಿದ್ದು, ಪ್ರಾಥಮಿಕ ಹಂತದ ತನಿಖೆ ಜಾರಿಯಲ್ಲಿರುತ್ತದೆ. | | ತನಿಖಾ ಚಾಲ್ತಿಯಲ್ಲಿದ್ದು ತನಿಖಾ ವರದಿ ಆಧರಿಸಿ ಕ್ರಮ ಜರುಗಿಸಲಾಗುವುದು. |